# ಕಂದನ ಕಾವ್ಯಮಾಲೆ

ಸಂಪಾದಕ

ಜಿ. ಪಿ. ರಾಜರತ್ನಂ



ರಾಮಮೋಹನ ಕಂಪೆನಿ

ಬೆಂಗಳೂರು

೧೯೩೩] [ಮೂರಾಣೆ.

# ಕನ್ನಡ ನಾಡಿನ ಕಂದನಿಗೆ

ಕನ್ನಡ ನಾಡಿನ ಕಂದ !
ನಿನ್ನ ಕೊರಲಿಗಿದು ಚಂದ !

ನಮ್ಮ ನಾಡಿನಲಿ ನಿಂದ
ಕವಿಗಳ ಬೊಕ್ಕಸದಿಂದ
ನಿನಗೆಂದಾರಿಸಿ ತಂದ
ಕಾವ್ಯಮಾಲೆಯಿದು ಕಂದ !

ಕನ್ನಡ ನಾಡಿನ ಕಂದ !
ನಿನ್ನ ಕೊರಲಿಗಿದು ಚಂದ !

# ಮೊದಲ ಮಾತು

ಮೈಸೂರಿನಲ್ಲಿ 'ಶಿಶುವಿಹಾರ' ಎಂಬ ಶಿಶುಗಳ ವಿಹಾರಸ್ಥಳವು ಒಂದುಂಟು. ಅಲ್ಲಿಯ ಆಟಪಾಟಕ್ರಮದಲ್ಲಿ ಪದ್ಯಬೋಧೆಗೂ ಎಡೆಯುಂಟು. ಅದರಲ್ಲಿಯೂ ಅವರವರ ಒಪ್ಪಿಗೆಯ ಪದ್ಯಗಳನ್ನು ಅವರವರೇ ಆರಿಸಿ ಆಸ್ವಾದಿಸುವ ಸ್ವಾತಂತ್ರ್ಯವು ಆ ಮಕ್ಕಳಿಗೆ ಉಂಟು. ಈಗ ಸದ್ಯದಲ್ಲಿ ಸುಮಾರು ಎಂಟೊಂಭತ್ತು ವರುಷ ವಯಸ್ಸಿಗೆ ಮಿಕ್ಕ ಮಕ್ಕಳು ಅಲ್ಲಿಲ್ಲ. ಆ ಮಕ್ಕಳು ಬಹುಮತದಿಂದ ಆರಿಸಿ ಸವಿದ ಕವನಗಳ ಕಲಿಕೆಯೇ ಈ "ಕಂದನ ಕಾವ್ಯಮಾಲೆ." ಎಂದರೆ ಈ "ಕಂದನ ಕಾವ್ಯಮಾಲೆ"ಯು ತಕ್ಕ ಒರೆಗಲ್ಲನ್ನು ಯಶಸ್ವಿಯಾಗಿ ತಟಹಾಯ್ದಿದೆ ಎನ್ನಬಹುದು.

ಇಲ್ಲಿ ಕಾಣುವ ಕವನಗಳಲ್ಲಿ 'ಮೈಸೂರು', 'ನನ್ನ ಮನೆ', 'ದುಂಬಿ', 'ಸಾಬೂನು', 'ಚಟಾಕಿ'—ಎಂಬಿವು ಅದೇ ಹೆಸರಿನ ದೀರ್ಘಕವನಗಳಿಂದ ಶಿಶುಗಳಿಗೆ ಸುಟಿಯೆಂದು ಕಂಡ ಭಾಗಗಳನ್ನು ಎತ್ತಿ ಬಂದುವು. 'ಕರ್ಣಾಟಕದ ಕಾಳಿಂಗ'ವು 'ಗೋವಿನ ಕತೆ'ಯ ಆದಿಭಾಗ. ಮಿಕ್ಕವೆಲ್ಲವೂ ಇದ್ದಂತೆಯೆ ಇವೆ.

ತಮ್ಮ ತಮ್ಮ ಕವನಗಳನ್ನು ಹೀಗೆ ಬಳಸಲು ಅನುಮತಿಯಿತ್ತ ಶ್ರೀಯುತರುಗಳಾದ ಶಿವರಾಮ ಕಾರಂತ, ರಾಜರತ್ನಂ, 'ಹೊಯಿಸಳ', ಮಚ್ಚಿಮಾಲೆ ಶಂಕರನಾರಾಯಣರಾವ್, 'ಕಲಾಕುಮಾರ', ಎಂ. ವಿ. ಸೀತಾರಾಮಯ್ಯ, 'ಶ್ರೀ', ಕೆ. ವಿ. ಪುಟ್ಟಪ್ಪ,

ಜಿ. ಎನ್. ಲಕ್ಷ್ಮಣ ಪೈ, ಜಿ. ವಾಸುದೇವರಾವ್, ದಿನಕರ ದೇಸಾಯಿ, 'ಅಂಬಿಕಾತನಯದತ್ತ', ಪೇಜಾವರ ಸದಾಶಿವರಾವ್ ಮತ್ತು ಎಲ್. ಗುಂಡಪ್ಪ—ಇವರಿಗೆ ನಾನು ಚಿರಋಣಿ. ಅಲ್ಲದೆ 'ಕವಿಶಿಷ್ಯ'ರ 'ಹಾವಿನ ಹಾಡಿ'ಗಾಗಿ ಬಾಸೆಲ್ ಮಿಷನ್ ಅಧಿಕಾರಿಗಳಿಗೂ, ಶ್ರೀಮಾನ್ ದೊಡ್ಡೇರಿ ವೆಂಕಟಗಿರಿರಾಯರ ಸಂಗ್ರಹಗಳಿಗಾಗಿ ಅವರಿಗೂ, 'ನಕ್ಷತ್ರ' 'ಬಿಡುವು'ಗಳಿಗಾಗಿ ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಡಿರೆಕ್ಟರವರಿಗೂ ನಾನು ಕೃತಜ್ಞನು. ಉಳಿದ 'ಹಳೆಯ ಹಾಡು'ಗಳು ನಾಡಿನ ಸ್ವತ್ತೆಂಬ ಭಾವನೆಯು ತಪ್ಪಾಗಿದ್ದಲ್ಲಿ, ಆ ಸಂಬಂಧಿಸಿದವರಿಗೂ ನನ್ನ ಕೃತಜ್ಞತೆಗಳು—ಈ ಮೂಲಕ.

ಹೀಗೆ ಕನ್ನಡ ನಾಡಿನ ಕಂದಗಳಿಗೆ ಈ ಪುಟ್ಟ ರಸಗವಳವನ್ನು ಅಣಿಮಾಡಲು ನೆರವಾದವರೆಲ್ಲರಿಗೂ ಆ ಕಂದಗಳ ಪರವಾಗಿಯೂ ವಂದಿಸುತ್ತೇನೆ.

೧೫-೧೦-೧೯೩೩,
ಮೈಸೂರು ನಗರ.

ಸಂಪಾದಕ.

# ವಿವರ

## ತಾರಕ್ಕ ಬಿಂದಿಗೆ (ಹಳೆಯ ಹಾಡು)

ತಾರಕ್ಕ ಬಿಂದಿಗೆ
ನೀರಿಗೆ ಹೋಗುವ
ತಾರೇ ಬಿಂದಿಗೆಯ
ಬಿಂದಿಗೆ ಒಡೆದರೆ
ಒಂದೇ ಕಾಸು
ತಾರೇ ಬಿಂದಿಗೆಯ.

---

## ಹಾಲಿಗೊಂದು ಕಾಸು (ಹಳೆಯ ಹಾಡು)

ಹಾಲಿಗೊಂದು ಕಾಸು
ಮೊಸರಿಗೊಂದು ಕಾಸು
ಬೆಣ್ಣೆಗೊಂದು ಕಾಸು
ತುಪ್ಪಕ್ಕೊಂದು ಕಾಸು
ಚಿಕ್ಕಪ್ಪ ಕೊಟ್ಟ ಕಾಸು
ಪುಕಸಟ್ಟೆ ಹೋಯ್ತು
ಮಾವಯ್ಯ ಕೊಟ್ಟ ಕಾಸು
ಮಾಯವಾಗೆ ಹೋಯ್ತು.

---

## ಹಣ್ಣು! ಹಣ್ಣು!

(ಶಿವರಾಮ ಕಾರಂತ)

ಹಣ್ಣು ! ಹಣ್ಣು ! ಮಾವಿನ ಹಣ್ಣು !
ಮಕ್ಕಳ ಬಾಯಿಗೆ ಬಾಳೇ ಹಣ್ಣು !
ಹೆತ್ತವರ ಬಾಯಿಗೆ ಹಲಸಿನ ಹಣ್ಣು !
ಮುದುಕರ ಬಾಯಿಗೆ ಹಾಗಲ ಹಣ್ಣು !
ಕಣ್ಣು ಮುಚ್ಚು !
ಬಾಯಿ ಬಿಚ್ಚು !
ಅಕ್ಕಿ ನುಚ್ಚು !
ನೀ ಬರಿ ಹುಚ್ಚು !

---

## ಬೊಬ್ಬೊಭೋಂ ಬೊಮ್ಮ

(ಶಿವರಾಮ ಕಾರಂತ)

ಬೊಬ್ಬೊಭೋಂ ಬೊಮ್ಮ
ಬಂತೊಂದು ಗುಮ್ಮ
ಶೀತ ಆದರೆ ಕೆಮ್ಮ
ಹುಟ್ಟಿಸಿದನು ಬೊಮ್ಮ
ನೀನು ನನ್ನ ತಮ್ಮ
ಕೇಳುವರಿಲ್ಲ ನಮ್ಮ
ಲಾಗ ಹೊಡಿಯೊ ತಿಮ್ಮ
ಬೊಬ್ಬೊಭೋಂ ಬೊಮ್ಮ.

## ಬಳೆ

(ಜಿ. ಪಿ. ರಾಜರತ್ನಂ)

ಬಳೇ ಬೇಕೆ ಬಳೆ!
ತೊಡುವುದಕೆ ಬಳೆ!
ಕೈಯಿಗೊಳ್ಳೆ
ಗಾಜುಬಳೆ!
ಬಳೇ ಬೇಕೆ ಬಳೆ!

ಬಳೇ ಬೇಕೆ ಬಳೆ!
ತಿನುವುದಕೆ ಬಳೆ!
ಬಾಯಿಗೊಳ್ಳೆ
ಕೋಡುಬಳೆ!
ಬಳೇ ಬೇಕೆ ಬಳೆ!

ಬಳೇ ಬೇಕೆ ಬಳೆ!
ತರಹವಾರಿ ಬಳೆ!
ಗಾಜುಬಳೆ!
ಕೋಡುಬಳೆ!
ಬಳೇ ಬೇಕೆ ಬಳೆ!

---

## ಚೆಂದು ಮಾಮ ('ಹೊಯಿಸಳ')

ಬಾ ಬಾ ಚೆಂದು ಮಾಮ
ಮುತ್ತುಕೊಡು ಬಾ. ॥ಪಲ್ಲವಿ॥

ಕಬ್ಬು ಹೆಚ್ಚಿ ತಿರುಳೇ ಕೊಡುವೆ
ಮಾವು ಹೆಚ್ಚಿ ವಾಟೇ ಕೊಡುವೆ. ॥೧॥

ಕೌಲಿ ಹಾಲ ಕರೆಯಿಸಿ ಕೊಡುವೆ
ಹಾಲು ಕುಡಿಯಲು ಬಟ್ಟಲು ಕೊಡುವೆ. ॥೨॥

ತುಪ್ಪದ ದೀಪ ಹಚ್ಚಿ ಇಡುವೆ
ಪುಟ್ಟ ಪುಸ್ತಕ ಓದಲು ಕೊಡುವೆ. ॥೩॥

ಆಟದ ಸಾಮಾನೆಲ್ಲ ಕೊಡುವೆ
ನಿನ್ನ ಸಂಗಡ ಆಡುತಲಿರುವೆ. ॥೪॥

---

## ಧನದೇವಿ (ದೊಡ್ಡೇರಿ ವೆಂಕಟಗಿರಿರಾಯರ ಸಂಗ್ರಹ)

ಮಕ್ಕಳು ಮನೆತುಂಬಿ ಕೊಟ್ಟಿಗೆಲಿ ಕರುತುಂಬಿ
ಗರತಿಯು ಕೈಲಿ ಬಳೆ ತುಂಬಿ—ಇದ್ದರೆ
ಬರುವೆಕಾಣೆಂದಳು ಧನದೇವಿ.

# ತುತ್ತೂರಿ

(ಜಿ. ಪಿ. ರಾಜರತ್ನಂ)

ಬಣ್ಣದ ತಗಡಿನ
ತುತ್ತೂರಿ
ಕಾಸಿಗೆ ಕೊಂಡನು
ಕಸ್ತೂರಿ.

ಸರಿಗಮ ಪಧನಿಸ
ಊದಿದನು
ಸನಿಧಪ ಮಗರಿಸ
ಊದಿದನು.

ತನಗೇ ತುತ್ತುರಿ
ಇದೆಯೆಂದ
ಬೇರಾರಿಗು ಅದು
ಇಲ್ಲೆಂದ.

ಕಸ್ತುರಿ ನಡೆದನು
ಬೀದಿಯಲಿ
ಜಂಭದ ಕೋಳಿಯು
ರೀತಿಯಲಿ.

ತುತ್ತುರಿಯೂದುತ
ಕೊಳದ ಬಳಿ
ನಡೆದನು ಕಸ್ತುರಿ
ಸಂಜೆಯಲಿ.

ಜಾರಿತು ನೀರಿಗೆ
ತುತ್ತೂರಿ
ಗಂಟಲು ಕಟ್ಟಿತು
ನೀರೂರಿ.

ಸರಿಗಮ ಊದಲು
ನೋಡಿದನು
ಗಗಗಗ ಸದ್ದನು
ಮಾಡಿದನು.

ಬಣ್ಣವು ನೀರಿನ
ಪಾಲಾಯ್ತು
ಬಣ್ಣದ ತುತ್ತುರಿ
ಬೋಳಾಯ್ತು.

ಬಣ್ಣದ ತುತ್ತೂರಿ
ಹಾಳಾಯ್ತು
ಜಂಭದ ಕೋಳಿಗೆ
ಗೋಳಾಯ್ತು.

---

## ದೊಡ್ಡವರು

('ಹೊಯಿಸಳ')

ದುಡ್ಡು ಬಟ್ಟೆಯಿಂದ
ದೊಡ್ಡವರಾದೋರಿಲ್ಲ!
ದೊಡ್ಡ ಕೆಲಸ ಮಾಡಿ
ದೊಡ್ಡವರಾದೋರೆಲ್ಲ!

ಮೈಯ ಬಣ್ಣದಿಂದ
ದೊಡ್ಡವರಾದೋರಿಲ್ಲ!
ದೊಡ್ಡ ಗುಣವಿದ್ದು
ದೊಡ್ಡವರಾದೋರೆಲ್ಲ!

(ಬಂಗಾಳಿಯಿಂದ)

---

## ಕಡಲೆ ಪುರಿ

(ಜಿ. ಪಿ. ರಾಜರತ್ನಂ)

ಪುರಿ ! ಪುರಿ ! ಕಡಲೆ ಪುರಿ !
ಗರಂ ಗರಂ ಕಡಲೆ ಪುರಿ !
ಎಲ್ಲ ಬನ್ನಿ !
ತೆಗೆದು ತಿನ್ನಿ !
ಗರಂ ಗರಂ ಕಡಲೆ ಪುರಿ !
ಕಾಸಿಗೊಂದು ಸೇರು ಪುರಿ !

ಬಿಸಿ ಬಿಸಿ ಕಡಲೆ ಪುರಿ !
ಕರಂ ಕುರಂ ಕಡಲೆ ಪುರಿ !
ಕೊಬರಿ ಇಲ್ಲ !
ಇದೆ ಬೆಲ್ಲ !
ತಿನ್ನಿ ! ತಿನ್ನಿ ! ಕಡಲೆ ಪುರಿ !
ಕಾಸಿಗೊಂದು ಸೇರು ಪುರಿ !

ಮಕ್ಕಳಿಗೆ ತಕ್ಕ ಪುರಿ !
ಗರಂ ಗರಂ ಕಡಲೆ ಪುರಿ !
ಕಾಸೆ ಬೇಡ !
ತಿಂದು ನೋಡಿ !
ಬಿಸಿ ಬಿಸಿ ಕಡಲೆ ಪುರಿ !
ಕಾಸಿಗೊಂದು ಸೇರು ಪುರಿ !

# ಬೆಣ್ಣೆ ಕಳ್ಳ

(ಮಚ್ಚಿಮಲೆ ಶಂಕರನಾರಾಯಣರಾವ್)

ಬಂದ ಕಳ್ಳ
ಬೆಣ್ಣೆ ಕಳ್ಳ,
ಅತ್ತ ಇತ್ತ ಸುತ್ತ ಮುತ್ತ
ನೋಡಿಕೊಂಡ, ಬೆಣ್ಣೆ ಕಳ್ಳ.
ಅಲ್ಲಿ ನಿಂತ
ಇಲ್ಲಿ ನಿಂತ,
ಹಾಗೆ ನಿಂತ
ಹೀಗೆ ನಿಂತ,
ಹೆಜ್ಜೆ ಮೇಲೆ ಹೆಜ್ಜೆ ಇಟ್ಟು,
ನಿಂತು ನಿಂತು ಕಿವಿಯ ಕೊಟ್ಟು,
ಬೆಕ್ಕನಂತೆ ಕಣ್ಣು ಬಿಟ್ಟು,
ಮುಂದೆ ಹೋದ
ಹಿಂದೆ ಸರಿದ;
ಬಂದ ಕಳ್ಳ
ಬೆಣ್ಣೆ ಕಳ್ಳ,

ಅಜ್ಜಿ ಇಟ್ಟ
ಮಡಿಕೆ ಬಳಿಗೆ
ಬಂದು, ಬೆಣ್ಣೆ ಕಂಡು ಒಳಗೆ,
ದೂರದಿಂದ ಬಗ್ಗಿ ಕೆಳಗೆ,
ಕೈಯನಿಕ್ಕಿ,
ಮುದ್ದೆ ಹೆಕ್ಕಿ,
ಎಲ್ಲ ಮುಕ್ಕಿ.
ಬೆರಳ ನೆಕ್ಕಿ,
ಮಿಣುಕು ಮಿಣುಕು ಕಣ್ಣು ಮಾಡಿ,
ಹಿಂದೆ ಮುಂದೆ ನೋಡಿ ನೋಡಿ,
ನಗುತ ನಗುತ ಹೋದ ಓಡಿ.
ಹೋದ ಕುಳ್ಳ
ಬೆಣ್ಣೆ ಕಳ್ಳ.

---

## ಚಳಿಯಪ್ಪ ಚಳಿರೊ ('ಕಲಾಕುಮಾರ')

ಚಳಿಭಾವ ಬಂದ—ಮಲ್ಲೆ ಹೂವ್ನ ತಂದ
ಗಾಳಿಮಾವ್ನ ಜತೆಗೆ—ಕಂಪನೆಲ್ಲ ಕಳಿಸ್ದ
ಚಳಿಯಪ್ಪ ಚಳಿರೊ ! ಚಳಿಯಮ್ಮ ಚಳಿರೊ !

## ಇರುವೆ

(ಎಂ. ವಿ. ಸೀತಾರಾಮಯ್ಯ)

ಇರುವೆ! ಇರುವೆ! ಇರುವೆ! ಇರುವೆ!
ಎಲ್ಲೆಲ್ಲೂ ಇರುವೆ!
ಎಲ್ಲಿ ನೋಡಿದರು ನೀನಿರುವೆ!

ಸಕ್ಕರೆ ಡಬ್ಬವ ತೆಗೆದರೆ ಇರುವೆ!
ಅಕ್ಕಿಯ ಮೂಟೆಯಲಲ್ಲೂ ಇರುವೆ!
ಬೆಲ್ಲದ ಅಚ್ಚನು ಮುತ್ತಿರುವೆ!
ಕಲ್ಲು ಸಕ್ಕರೆಯ ಸುತ್ತಿರುವೆ!
ಎಲ್ಲಿ ನೋಡಿದರು ನೀನಿರುವೆ!

ತುಪ್ಪದ ಗಡಿಗೆಯ ಮನೆ ಮಾಡಿರುವೆ!
ಹಪ್ಪಳ ಸಂಡಿಗೆಯನು ಕೊರೆದಿರುವೆ!
ಹಾಲಿನ ಒಳಗೂ ನೀನಿರುವೆ!
ಕಾಫಿಯ ಒಳಗೂ ನೀನಿರುವೆ!
ಎಲ್ಲಿ ನೋಡಿದರು ನೀನಿರುವೆ!

ಇರುವೆ! ಇರುವೆ! ಇರುವ! ಇರುವೆ!
ಎಲ್ಲೆಲ್ಲೂ ಇರುವೆ!
ಎಲ್ಲಿ ನೋಡಿದರು ನೀನಿರುವೆ!

# ತೊಟ್ಟಿಲ

('ಹೊಯಿಸಳ')

ತೊಟ್ಟೇ! ನಾನೊಂದು ತೊಟ್ಟೆ!
ಮಾಯಿಾ ಕೈಲಿ ತಿಂಬೋ ತೊಟ್ಟೆ;
ಬಾಬೂ ಕೈಲಿ ಉಂಬೋ ತೊಟ್ಟೆ;
ಭಾವನ ಕೈಲಿ ಹೂವಿನ ತೊಟ್ಟೆ;
ಅಕ್ಕನ ಕೈಲಿ ದಾನದ ತೊಟ್ಟೆ;
ತೊಟ್ಟೇ! ನಾನೊಂದು ತೊಟ್ಟೆ!

ಹೂವಿನ ವಾಸನೆ ಬೇಡ್ವೆ ನನಗೆ;
ತಿಂಡಿಯ ಸವಿಯು ಇರಲ್ಕೆ ನಿಮಗೆ;
ಹೊತ್ತ ಕೂಲೀ ಬೇಡ ನನ್ನಯ್ಯ;
ಕೊಟ್ಟ ಪುಣ್ಯ ನಿಮಗಿರಲವ್ವ;
    ಊಳಿಗದಲ್ಲಿ ಹೊಳೆ ಹೊಳೆವೆ!
    ಆಲಸ್ಯದಲ್ಲಿ ಹೊಲಸಿಡುವೆ!
ತೊಟ್ಟೇ! ನಾನೊಂದು ತೊಟ್ಟೆ!
ತೊಟ್ಟೇ! ನಾನೊಂದು ತೊಟ್ಟೆ!

---

# ಮೈಸೂರು

('ಶ್ರೀ')

ನಿಮ್ಮ ನಾಡಾವುದು ?
ಮೈಸೂರು.
ನಿಮ್ಮೂರದಾವುದು ?
ಮೈಸೂರು.
ಕನ್ನಡದ ಕಣ್ಣದು,
ಮೈಸೂರು.
ಕನ್ನಡಿಗನುಸಿರದು,
ಮೈಸೂರು.

ಚಿನ್ನದ ನಾಡದು,
ಮೈಸೂರು.
ಗಂಧದ ಗುಡಿಯದು,
ಮೈಸೂರು.
ವೀಣೆಯ ಬೆಡಗದು,
ಮೈಸೂರು.
ನಾಲುಮುಡಿ ಕೃಷ್ಣನ
ಮೈಸೂರು.

---

# ಸಂತಂಮ್ಮಣ್ಣ

('ಹೊಯಿಸಳ')

ಕಲ್ಯಾಣಶೇವೆ—ಜೇಬಿನ ಬುಡದಲಿ
ಪುಟಾಣಿ ಪುರಿಯು—ಮೇಲೊಂದಿಷ್ಟು
ಗೋಲೀ ಬಳಪ—ಮತ್ತೊಂದಿಷ್ಟು
ಬಂದ, ಬಂದ, ಸಣ್ಣ ತಮ್ಮಣ್ಣ.

ಪಠಾಸು ಪೆಟ್ಲು—ಒಳಜೇಬಲ್ಲಿ
ಕಾಸಿನ ಸಾಲು—ಕಳ್ಳಜೇಬಲ್ಲಿ
ಚೆಂಡು ದಾಂಡು—ಎಡಬಲದಲ್ಲಿ
ಬಂದ, ಬಂದ, ಸಂತಂಮ್ಮಣ್ಣ.

ಅಮ್ಮನ ಹಾರ—ಉಬ್ಬಿದ ಎದೆಗೆ
ಬಿದಿರಿನ ಕೊಳಲು—ಗೆಜ್ಜೆಯ ಒಳಗೆ
ಹದ್ದಿನ ರೆಕ್ಕೆ—ಎತ್ತಿದ ತಲೆಗೆ
ಬಂದ, ಬಂದ, ಸಣ್ಣ ತಮ್ಮಣ್ಣ.

ಕಸ್ತೂರಿ ಚಂದ್ರ—ಹಣೆಯಲ್ಲಿಹುದು
ಸಂಜೆಯ ಶುಕ್ರ—ಕಣ್ಣಲ್ಲಿಹುದು
ಬೆಳುಬೆಳ್ದಿಂಗಳು—ಗಲ್ಲದ ಮೇಲೆ
ಬಂದ, ಬಂದ, ಸಂತಂಮ್ಮಣ್ಣ.

ಮೊದಲನೆ ಮಾತು—ಹೂವಿನ ಮುತ್ತು
ಮರುಮಾತಾಡಲು—ಸಿಡಿಲು ಗುಡುಗು
ಮೂರನೆ ಬಾರಿಗೆ—ಆನೆಕಲ್ಮಳೆಯು
ಬಂದ, ಬಂದ, ಸಣ್ಣ ತಮ್ಮಣ್ಣ.

ಬಾರೊ, ಬಾರೊ, ಸಿಡಿಲಿನ ಮರಿಯೆ!
ಬಾರೊ, ನಾಡಿನ ಸುಂಟರಗಾಳಿ!
ತೋರೊ ಸಿರಿಮೊಗ, ತುಂಟರ ಗುರುವೆ!
ಬಂದ, ಬಂದ, ಸಂತಂಮಣ್ಣ.

———

## ಹೂವಾಡಿಗಿತ್ತಿ

(ಎಂ. ವಿ. ಸೀತಾರಾಮಯ್ಯ)

ಹೂವನು ಮಾರುತ
ಹೂವಾಡಿಗಿತ್ತಿ
ಹಾಡುತ ಬರುತಿಹಳು.
ಘಮಘಮ ಹೂಗಳು
ಬೇಕೇ ಎನುತ
ಓಡುತ ಬರುತಿಹಳು.

ಬಿಳುಪಿನ ಮಲ್ಲಿಗೆ
ಹಳದಿಯು ಸಂಪಿಗೆ
ಹಸುರಿನ ಹೊಸ ಮರುಗ
ಹಾಕಿ ಕಟ್ಟಿರುವೆ
ಬೇಕೇ ಎನುತ
ಹಾಡುತ ಬರುತಿಹಳು.

ಹೊಸ ಸೇವಂತಿಗೆ
ಹೊಸ ಇರುವಂತಿಗೆ
ಅರಿಸಿನ ತಾಳೆಯಿದೆ.
ಅಚ್ಚ ಮಲ್ಲೆಯಲಿ
ಪಚ್ಚೆ ತೆನೆಗಳು
ಸೇರಿದ ಮಾಲೆಯಿದೆ.

ಕಂಪನು ಚೆಲ್ಲುವ
ಕೆಂಪು ಗುಲಾಬಿ,
ಅರಳಿದ ಹೊಸ ಕಮಲ;
ಬಿಳುಪಿನ ಜಾಜಿ
ಹಳದಿಯು ಜಾಜಿ
ಅರಳಿದ ಬಿಳಿ ಕಮಲ.

ಬಗೆ ಬಗೆ ಹೂಗಳು
ಬೇಕೇ ಎನುತ
ಹಾಡುತ ಬರುತಿಹಳು
ಹೂವನು ಮಾರುವ
ಹೂವಾಡಿಗಿತ್ತಿ
ಓಡುತ ಬರುತಿಹಳು.

---

## ನನ್ನ ಮನೆ

(ಕೆ. ವಿ. ಪುಟ್ಟಪ್ಪ)

ಮನೇ ಮನೇ ಮುದ್ದು ಮನೇ
ಮನೇ ಮನೇ ನನ್ನ ಮನೇ!

ನನ್ನ ತಾಯಿಯೊಲಿದ ಮನೆ,
ನನ್ನ ತಂದೆ ಬಳೆದ ಮನೆ;
ನನ್ನ ಗೆಳೆಯರೊಡನೆ ಕೂಡಿ,
ಮುದ್ದು ಮಾತುಗಳನು ಆಡಿ,
ಮಕ್ಕಳಾಟಗಳನು ಹೂಡಿ
ನಾನು ನಲಿದ ನನ್ನ ಮನೆ.

ತಾಯಿ ಮುತ್ತುಕೊಟ್ಟ ಮನೆ,
ತಂದೆ ಎತ್ತಿಕೊಂಡ ಮನೆ ;
ಮನೆಗೆ ಬಂದ ನಂಟರೆಲ್ಲ
ಕೂಗಿ ಕರೆದು, ಕೊಬರಿ ಬೆಲ್ಲ
ಗಳನು ಕೊಟ್ಟು, ಸವಿಯ ಸೊಲ್ಲ
ನಾಡುತಿದ್ದ ನನ್ನ ಮನೆ !

ನಾನು ಬಿದ್ದು ಎದ್ದ ಮನೆ,
ಮೊದಲು ಬೆಳಕು ಕಂಡ ಮನೆ ;
ತಿಪ್ಪ ತಿಪ್ಪ ಹೆಜ್ಜೆಯಿಟ್ಟು,
ಬಿಸಿಲ ಕೋಲು ಹಿಡಿದು ಬಿಟ್ಟು,
ತಂಗಿ ತಮ್ಮರೊಡನೆ ಹಿಟ್ಟು
ತಿಂದು ಬೆಳೆದ ನನ್ನ ಮನೆ !

ಮೊದಲ ಮಿಂಚು ಹೊಳೆದ ಮನೆ,
ಮೊದಲ ಗುಡುಗು ಕೇಳ್ದ ಮನೆ ;
ಮೊದಲ ಮಳೆಯು ಕರೆದು ಕರೆದು,
ಹೆಂಚ ಮೇಲೆ ಸದ್ದು ಹರಿದು,
ಮಾಡಿನಿಂದ ನೀರು ಸುರಿದು,
ಬೆರಗನಿತ್ತ ನನ್ನ ಮನೆ !

## ಹಾವಿನ ಹಾಡು

('ಕವಿಶಿಷ್ಯ')

ನಾಗರ ಹಾವೆ! ಹಾವೊಳು ಹೂವೆ!
ಬಾಗಿಲ ಬಿಲದಲಿ ನಿನ್ನಯ ಠಾವೆ?
ಕೈಗಳ ಮುಗಿವೆ, ಹಾಲನ್ನೀವೆ
ಬಾ ಬಾ ಬಾ ಬಾ ಬಾ ಬಾ ಬಾ ಬಾ.

ಹಳದಿಯ ಹೆಡೆಯನು ಬಿಚ್ಚೋ ಬೇಗಾ!
ಹೊಳಹಿನ ಹೊಂದಲೆ ತೂಗೋ, ನಾಗಾ!
ಕೊಳಲನ್ನೂದುವೆ ಲಾಲಿಸು ರಾಗಾ!
ನೀ ನೀ ನೀ ನೀ ನೀ ನೀ ನೀ ನೀ.

ಎಲೆ ನಾಗಣ್ಣ, ಹೇಳೆಲೊ ನಿನ್ನಾ
ತಲೆಯಲಿ ರನ್ನವಿಹ ನಿಜವನ್ನಾ!
ಬಲು ಬಡವಗೆ ಕೊಪ್ಪರಿಗೆಯ ಚಿನ್ನಾ!
ತಾ ತಾ ತಾ ತಾ ತಾ ತಾ ತಾ ತಾ.

ಬರಿಮೈ ತಣ್ಣಗೆ, ಮನದಲಿ ಬಿಸಿ ಹಗೆ,
ಎರಡೆಳೆ ನಾಲಗೆ ಇದ್ದರು ಸುಮ್ಮಗೆ
ಎರಗುವೆ ನಿನಗೆ, ಈಗಲೆ ಹೊರಗೆ
ಪೋ ಪೋ ಪೋ ಪೋ ಪೋ ಪೋ ಪೋ ಪೋ.

# ಡೊಂಕು ಬಾಲದ ನಾಯಕರು (ಪುರಂದರ ದಾಸರು)

ಡೊಂಕುಬಾಲದ ನಾಯಕರೆ
ನೀವೇನೇನೂಟ ಮಾಡಿದಿರಿ ?

ಕಣಕ ಕುಟ್ಟೊ ಅಲ್ಲಿಗೆ ಹೋಗಿ
ಹಣಿಕಿ ಹಣಿಕಿ ನೋಡುವಿರಿ
ಕಣಕ ಕುಟ್ಟೊ ಒನಕೆಲಿ ಬಡಿದರೆ
ಕ್ಯಾಂ ಕುಯ್ ರಾಗವ ಹಾಡುವಿರಿ.

ಹುಗ್ಗಿ ಮಾಡೊ ಅಲ್ಲಿಗೆ ಹೋಗಿ
ತಗ್ಗಿ ಬಗ್ಗಿ ನೋಡುವಿರಿ
ಹುಗ್ಗಿ ಮಾಡೊ ಸೌಟಲಿ ಹೊಡೆದರೆ
ಕ್ಯಾಂ ಕುಯ್ ರಾಗವ ಹಾಡುವಿರಿ.

ಹಿರೆ ಬೀದಿಯಲಿ ಓಡುವಿರಿ
ಕರೆ ಬೂದಿಯಲಿ ಹೊರಳುವಿರಿ
ಪುರಂದರ ವಿಠಲರಾಯನು ಹೇಳಿದ
ಪರಿಪರಿ ಆಟದಿ ಚರಿಸುವಿರಿ.

---

# ಗುರು

(ಕೆ. ವಿ. ಪುಟ್ಟಪ್ಪ)

ಸಂಪಗೆ ಹೂವನು ಸಂಪಗೆ ಹೂವೆಂ
ದೇತಕೆ ಕರೆವರು ಹೇಳಮ್ಮಾ—
ಹಿಂದಿನ ಜನರದಕಾ ಹೆಸರಿಟ್ಟರು
ಸಂಪಗೆ ಎನ್ನುವೆವದರಿಂದ.

ಬೇರೆಯ ಹೆಸರುಗಳಾಗಿನ ಜನರಿಗೆ
ತಿಳಿದಿರಲಿಲ್ಲವೆ ಏನಮ್ಮಾ ?
ಸಂಪಗೆಗಿಂತಲು ತಂಪಿಗೆ ಎಂದರೆ
ಇಂಪಾಗಿರುವುದು ಕೇಳ್ವರಿಗೆ.

ಜನರೇನಮ್ಮಾ ಹಿಂದಿನದೆಂದರೆ
ಕಂಗಳ ಮುಚ್ಚಿಯೆ ಪೂಜಿಪರು.
ನನ್ನೀ ಸಲಹೆಯನಾರೂ ಕೇಳರು
ತಂಗಿಯು ಒಬ್ಬಳೆ ಒಪ್ಪಿಹಳು.

ಕಾಳಗೆ ಹೇಳಿದೆ, ಜಟ್ಟುಗೆ ಹೇಳಿದೆ
ತಿಮ್ಮಗೆ ದಿನದಿನ ಬೋಧಿಸಿದೆ.
ಎಲ್ಲಾ ಸಂಪಗೆ, ಸಂಪಗೆ ಎಂಬರು
ತಂಪಿಗೆ ಎನ್ನುವರಾರಿಲ್ಲ!

ನಾನೂ ತಂಗಿಯು ತಂಪಿಗೆ ಎಂಬೆವು
ನೀನೂ ತಂಪಿಗೆ ಎನ್ನವ್ವಾ !—
ಆಗಲಿ ! ನಾನೂ ತಂಪಿಗೆ ಎಂಬೆನು
ನನಗೂ ತಂಗಿಗು ನೀನೆ ಗುರು !

---

## ಮಂಗನ ಮದುವೆ

(ಜಿ. ಎಚ್. ಲಕ್ಷ್ಮಣ ಪೈ)

ಬಿಸಿಲೂ ಮಳೆಯೂ ಕೂಡಿದುವು;
ಸೆಕೆಯನು, ತಂಪನು ಮಾಡಿದುವು.
ಕೋತಿಯು ಮಾಡಿತು ತುಂಟತನ.
ಕೋಳಿಯು ಮಾಡಿತು ಮೂರ್ಖತನ.
ಕೋತಿಗು ಕೋಳಿಗು ನಂಟತನ
ಮಾಡಲುಬೇಕೆಂಬುವ ಹದನ
ಮೃಗಗಳು ಖಗಗಳು ಚರ್ಚಿಸುತ,
ಮದುವೆಗೆ ಮಾಡಿದರಣಿ ನಗುತ.

ಮಂಗಗೆ ಪಂಚೆಯನುಡಿಸಿದರು ;
ರಂಗಿನ ಅಂಗಿಯ ಹಾಕಿದರು ;
“ ಲಾಗಾ ಹಾಕೋ, ಮಂಗಣ್ಣಾ !
ಥೈ ಥೈ ಕುಣಿಯೋ ತಿಮ್ಮಣ್ಣಾ !

ಕೋಳಿಯು ಗಂಡನೆ ಕಪಿಯಣ್ಣಾ,
ಮದುವಣಿಗನು ನೀ ಹೌದಣ್ಣಾ.
ಮೃಗವದು ಹಕ್ಕಿಯ ವರಿಸುವುದು
ನಿನ್ನಿಂ ಮೊದಲಾದುದು ಇಂದು
ನೀನೇ ದಾರಿಯ ತೋರಿಸಿದೆ.
ನೀನೆ ಸುಧಾರಕನೆನ್ನಿಸಿದೆ."
ಎಂದು ವಿನೋದದಿ ಆಡಿದರು,
ಚಂದದ ಪದಗಳ ಹಾಡಿದರು.

ಕೋಳಿಗೆ ಸೀರೆಯನುಡಿಸಿದರು ;
ಚಿನ್ನದೊಡವೆಗಳ ತೊಡಿಸಿದರು ;
"ಕೊಕ್ ಕೊಕ್ ಕೋ ಕೋ ಎಂದೆನ್ನು,
ಮಂಗನ ರಾಣಿಯು ನೀನಿನ್ನು.
ಬಗ್ಗಿಸುವೇತಕೆ ತಲೆಯನ್ನು ?
ಕೊಂಕಿಸುವೇತಕೆ ನಡೆಯನ್ನು ?
ಬಿಡು ಬಿಡು ಲಜ್ಜೆಯ, ಹೂ ಮಾಲೆ
ಕಪಿವರನಿಗೆ ಹಾಕೆಲೆ ಬಾಲೆ!"
ಎನ್ನುತ ಚೇಷ್ಟೆಯ ಮಾಡಿದರು.
ಹಿಗ್ಗುತ ನಲಿನಲಿದಾಡಿದರು.

ಸಂಭ್ರಮದೊಳಗಾಯಿತು ಮದುವೆ
ಮರ್ಕಟ ಕುಕ್ಕುಟರಾ ಮದುವೆ.

## ಹೂದೋಟದಲ್ಲಿ

(ಜಿ. ವಾಸುದೇವರಾವ್)

ಹಸುರು, ಹಳದಿ, ನೀಲಿ, ಕೆಂಪು—
ಏನಿದು ಬಣ್ಣಗಳಿಹ ನೋಟ?
ಸುತ್ತಲು ಎಲ್ಲಿಯು ಹೊಸ ಸವಿಗುಂಪು!..
ಓಹೋ, ತಿಳಿಯಿತು, ಹೂದೋಟ!

ಎಲ್ಲೆಲ್ಲಿಯು ಸಂಪಿಗೆ, ಸೇವಂತಿಗೆ,
ಸುಗಂಧಮಯವಾಗಿಹ ಜಾಜಿ,
ಬಿಳಿಮೋಡದವೊಲು ಕಾಣುವ ಮಲ್ಲಿಗೆ,
ಎಳೆಗೆಂಪಿನ ಬಣ್ಣದ ರೋಜ.

ಕುಂಜದ ಸುತ್ತಲು ಬಳ್ಳಿಯ ಮಲ್ಲಿಗೆ;
ಹಸುರೆಲೆ, ಬಿಳಿ ಹೂ ತುಂಬಿಹುವು.
ರಾತ್ರಿಯ ಕರಿಯಾಕಾಶದಿ ತಾರಗೆ
ಮಿರುಗುವವೊಲು ಮಿರುಮಿರುಗುವುವು.

ವನದಲಿ ನಾನೊಬ್ಬನೆ ತಿರುಗಾಡುತ
ಹೂಗಳನಾರಿಸುತಿರೆ ಚೆಂದ!
ಬಳ್ಳಿಯ ಮನೆಯಲಿ ಕುಳಿತಿರೆ ಹಾಡುತ
ಅದು ಮೈಮರೆಸುವ ಆನಂದ!

## ಹುಣ್ಣಿಮೆ ಹಪ್ಪಳ

(ಶಿವರಾಮ ಕಾರಂತ)

ಅಜ್ಜನು ಎರಡು ಹಪ್ಪಳ ಸುಟ್ಟ
ತಿನ್ನುವುದೊಂದನು ಕಂಡನು ಕಿಟ್ಟ.
ಕಂಡನು ; ಕಂಡವ ಹಲ್ಲನು ಬಿಟ್ಟ
ಅಜ್ಜಗೆ ಬಂದಿತು ಸಿಟ್ಟಿನ ಬೆಟ್ಟ.

ಕದ್ದೊ ತಿಂದಿಹ ಸಿಟ್ಟಿಗೆ ಕಿಟ್ಟ
'ನೀ ಮುದಿಹದ್ದು' ಅಂದೇಬಿಟ್ಟ
ಅಜ್ಜನು ಆಗಲೆ ಸಿಟ್ಟಿನಿಂದ
ಹಪ್ಪಳ ಎಸೆಯುತೆ 'ಹಿಡೀ' ಎಂದ.

ಕಿಟ್ಟು ಕೈಯಲಿ ಇತ್ತೊಂದು ಚೆಂಡು
ಮೇಣದ ಚೆಂಡಲಿ ಹೊಡೆದನು ಗುಂಡು
ಹಪ್ಪಳ ಗುಂಡು ಒಟ್ಟೊಟ್ಟಾಯಿತು
ಬೇಗದಿ ಹೋಗಿ ಬಾನಿಗೆ ಅಂಟಿತು.

ಹಪ್ಪಳ ಅಂಟುತೆ ಚಂದ್ರನು ಆದ
ಅಜ್ಜಗು ಕಿಟ್ಟುಗು ಸಿಕ್ಕದೆ ಹೋದ
ಹುಣ್ಣಿಮೆ ಹಪ್ಪಳ ಕಂಡವರೆಲ್ಲ
ಬಾಯ್ಬಾಯ್ ಬಿಡುವರು, ಸಿಕ್ಕದಲ್ಲ !

## ಅಂಚೆಯುವನು (ದಿನಕರ ದೇಸಾಯಿ)

ಓಲೆಯ ಹಂಚಲು ಹೊರಡುವೆ ನಾನು,
ತೋರಲು ಆಗಸದಲಿ ಬಿಳಿ ಭಾನು ;
ಮನೆಯಲಿ ನೀವು, ಬಿಸಿಲಲಿ ನಾನು !
ಕಾಗದ ಬಂತು ಕಾಗದವು.

ಹೆಗಲಲಿ ಹಳದಿಯ ಹಸುಬೆಯ ನೀಡಿ,
ಕಾಲಲಿ ಚರ್ಮದ ಎಕ್ಕಡ ಜೋಡಿ,
ತಲೆಯಲಿ ಖಾಕಿಯ ಪಗಡಿಯ ನೋಡಿ ;
ಓಲೆಯ ತಂದೆ ಓಲೆಯನು.

ಒಳಗಿಂದಲಿ ಜನರೆನ್ನನು ಕಂಡು,
ಬೇಗನೆ ಹೊರ ಅಂಗಳಕ್ಕೈತಂದು,
‘ ಕಾಗದವಿದೆಯೇ,’ ಎನ್ನುವುದುಂಟು ;
ಕಾಗದ ಬಂತು ಕಾಗದವು.

ಸೊಗಸಿನ ಸುದ್ದಿಯ ತರುವೆನು ನಿಮಗೆ ;
ವ್ಯಸನದ ವಾರ್ತೆಯ ಕೊಡುವೆನು ತಮಗೆ ;
ಎಲ್ಲಾ ಸುದ್ದಿಗಳೊಂದೇ ನಮಗೆ !
ಓಲೆಯ ತಂದೆ ಓಲೆಯನು.

ಇದು ಧನಹೀನರ, ಇದು ಹಣವಂತರ,
ಇದು ಗುಣಹೀನರ, ಇದು ಗುಣವಂತರ,
ಕಾಗದವೆನ್ನುತ ಮಾಡೆನು ಅಂತರ!
ಕಾಗದ ಬಂತು ಕಾಗದವು.

‘ಗಂಡನು ನಾಳೆಗೆ ಬರುವನು’ ಎಂದು,
‘ಅಯ್ಯೋ, ಹೆಂಡತಿ ತೀರಿದಳೆ’ಂದು,
ಹಿಗ್ಗುವ ತಗ್ಗುವ ಮೂಢರಿಗೆಂದು
ಓಲೆಯ ತಂದೆ ಓಲೆಯನು.

ಓಲೆಯ ಕೊಡುವಧಿಕಾರಿಯು ನಾನು;
ಆದರು ಅದರಲಿ ಬರೆದುದು ಏನು
ಎಂಬುದನರಿಯೆನು! ಬಲು ಸುಖಿ ನಾನು!
ಕಾಗದ ಬಂತು ಕಾಗದವು.

---

## ಚಳಿಯಪ್ಪ ಚಳಿರೊ

(‘ಕಲಾಕುಮಾರ’)

ಚಳಿಮಾವ ಬಂದ__ಪ್ಯೆರನ್ನೆಲ್ಲ ತಂದ
ಒಕ್ಕಲಿಗೆಲ್ಲ ತುಂಬ__ಹೊಟ್ಟೆನೆಲ್ಲ ತುಂಬ್ದ
ಚಳಿಯಪ್ಪ ಚಳಿರೊ! ಚಳಿಯಮ್ಮ ಚಳಿರೊ!

## ಕರಿ ಮರಿ ನಾಯಿ ('ಅಂಬಿಕಾತನಯದತ್ತ')

ಕರಿ ಮರಿ ನಾಯಿ ಕುಂಯಿಗುಡುತಿತ್ತು
ಭಟ್ಟರ ಬಾಯಿ ಒಟಗುಡುತಿತ್ತು.

ಸರಭರ ಮಳೆಯು ಸುರಿಯುತಲಿತ್ತು
ಕಾಲುವೆ ನೀರದು ಹರಿಯುತಲಿತ್ತು.

ಭೋರನೆ ಗಾಳಿಯು ಬೀಸುತಲಿತ್ತು
ತಬ್ಬಲಿ ಕುನ್ನಿಯು ಈಸುತಲಿತ್ತು.

ಬೆಚ್ಚನ ಮನೆಯಾ ಹೊಚ್ಚಲದೊಳಗೆ
ನಿಂತರು ಭಟ್ಟರು ಹಣಕುತ ಹೊರಗೆ.

ಮೆಟ್ಟಲನೇರಲು ಕುನ್ನಿಯು ಅತ್ತ
ಹವಣಿಸೆ ಬಾಗಿಲು ಮುಚ್ಚಿತು ಇತ್ತ.

ಭಪ್ಪರೆ ಭಪ್ಪರೆ ಭಲರೆ! ಭಟ್ಟರೋ
ಕಾಯ್ದರು ಮನೆಯನು ಏನು ದಿಟ್ಟರೋ!

ಕುನ್ನಿಯು ಒಳಗೇ ಬಂದೇನೆಂದಿತು;
ಭಟ್ಟರು ಬಂದರೆ ಕೊಂದೇನೆಂದರು.

## ಗಡಿಯಾರ

(ದಿನಕರ ದೇಸಾಯಿ)

ಗಂಟೆಯು ನೆಂಟನೆ ಓ ಗಡಿಯಾರ!
ಬೆಳ್ಳಿಯ ಬಣ್ಣದ ಗೋಳಾಕಾರ!
ವೇಳೆಯ ತಿಳಿಯಲು ನೀನಾಧಾರ
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ಒಂದೇ ಮುಖದಲಿ ದ್ವಾದಶನೇತ್ರ!
ಎರಡೇ ಕೈಗಳು ಏನು ವಿಚಿತ್ರ!
ಯಂತ್ರವು ಕಾಣದ ರಕ್ಕಸ ಪುತ್ರ!
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ಹಗಲೂ ಇರುಳೂ ಒಂದೇ ಬಾಳು
ನೀ ಯಾವಾಗಲು ದುಡಿಯುವ ಆಳು
ಕವಿಯನು ಹಿಂಡಲು ನಿನಗದು ಕೂಳು
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ಟಿಕ್ ಟಿಕ್ ಎನ್ನುತ ಹೇಳುವೆ ಏನು?
ನಿನ್ನಯ ಮಾತಿನ ಒಳಗುಟ್ಟೇನು?
ಕಾಲವು ನಿಲ್ಲದು ಎನ್ನುವೆ ನೀನು!
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ದುಡಿಯುವುದೊಂದೇ ನಿನ್ನಯ ಧರ್ಮ
ದುಡಿಸುವುದೊಂದೇ ನಮ್ಮಯ ಕರ್ಮ
ಇಂತಿರುವುದು ಕಲಿಯುಗದೀ ಮರ್ಮ
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

---

## ಕರ್ಣಾಟಕದ ಕಾಳಿಂಗ (ಹಳೆಯ ಹಾಡು)

ಧರಣಿಮಂಡಲ ಮಧ್ಯದೊಳಗೆ
ಮೆರೆಯುತಿಹ ಕರ್ಣಾಟ ದೇಶದಿ
ಇರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು.

ಗಿರಿಗಳೆಡೆಯೊಳು ಅಡವಿಮಧ್ಯದಿ
ತುರುವ ದೊಡ್ಡಿಯ ಮಾಡಿಕೊಂಡು
ಇರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು.

ಗೊಲ್ಲದೊಡ್ಡಿಯೊಳಿರುವ ಪಶುಗಳು
ಎಲ್ಲ ಬೆಟ್ಟದಮೇಲೆ ಮೇಯುತ
ಒಳ್ಳೆ ಹುಲ್ಲನು ನೀರ ಕುಡಿಯುತ
ಅಲ್ಲಿ ಮೆರೆದುವರಣ್ಯದಿ.

ತಿರುಗಿ ಮಂದೆಗೆ ಬರುತ ಪಶುಗಳು
ಕರುಗಳನು ನೆನೆನೆನೆದು ಕೂಗುತ
ಪರಿದು ಲಂಘಿಸಿ ಚಿಮ್ಮಿ ನೆಗೆಯುತ
ಭರದಿ ಬಂದುವು ದೊಡ್ಡಿಗೆ.

ಉದಯಕಾಲದೊಳೆದ್ದು ಗೊಲ್ಲನು
ನದಿಯ ಸ್ನಾನವ ಮಾಡಿಕೊಂಡು
ಮುದದಿ ತಿಲಕವ ಹಣೆಯೊಳಿಟ್ಟು
ಚದುರ ಶಿಖೆಯನು ಹಾಕಿದ.

ಎಳೆಯ ಮಾವಿನ ಮರದ ಕೆಳಗೆ
ಕೊಳಲನೂದುತ ಗೊಲ್ಲ ಗೌಡನು
ಬಳಸಿ ನಿಂದಿಹ ತುರುಗಳನ್ನು
ಬಳಿಗೆ ಕರೆದನು ಹರುಷದಿ.

ಗೊಲ್ಲ ಕರೆದ ಧ್ವನಿಯ ಕೇಳಿ
ಎಲ್ಲ ಪಶುಗಳು ಬಂದು ನಿಂತು
ಚೆಲ್ಲಿ ಸೂಸಿ ಹಾಲ ಕರೆಯಲು
ಅಲ್ಲಿ ತುಂಬಿತು ಬಿಂದಿಗೆ.

---

## ಒಗಟು

(ಮುಚ್ಚಿಮಲೆ ಶಂಕರನಾರಾಯಣರಾವ್)

ಕಾಡಿನ ನಡುವೆ
ಕಲ್ಲಿನ ನಾಡು ;

ಕಲ್ಲಿನ ಒಳಗೆ
ಬೆಳ್ಳಿಯ ಕೋಟೆ ;

ಕೋಟೆಯ ಒಳಗೆ
ನೀರಿದೆ ನೋಡು

ಹರಿಯದ ನೀರು
ನಿರ್ಮಲ ನೀರು

ಬಲ್ಲೆಯೊ ಪೋರ
ಈ ಎಳನೀರ.

---

## ಚಳಿಯಪ್ಪ ಚಳಿರೊ

('ಕಲಾಕುಮಾರ')

ಕೈಯ ಮುಷ್ಟಿಗಟ್ಟಿ—ಅಪ್ಪು ಗೈಯ ಹಾಕಿ
ಒಲೆಯ ಮುಂದ ಕುಂತ್ರ—ಮಾಗಿಭಾವ ಓಡ್ದ
ಚಳಿಯಪ್ಪ ಚಳಿರೊ ! ಚಳಿಯಮ್ಮ ಚಳಿರೊ !

## ಮಕ್ಕಳಾಟ (ದೊಡ್ಡೇರಿ ವೆಂಕಟಗಿರಿರಾಯರ ಸಂಗ್ರಹ)

ಮಕ್ಕಳೆಲ್ಲಾಡಿದವೊ ಮಣಿಯೆಲ್ಲಿ ಚೆಲ್ಲಿದವೊ
ಚಿಕ್ಕ ಚಿಕ್ಕೆಲೆಯ ಹುಣಿಸೇಯ—ಮರದಡಿಗೆ
ಮಕ್ಕಳಾಡಿದವು ಮಣಿಚೆಂಡ.

ಹುಡುಗರೆಲ್ಲಾಡಿದರೊ ಹೂವೆಲ್ಲಿ ಚೆಲ್ಲಿದರೊ
ಚಿಗುರು ಚಿಗುರೆಲೆಯ ಸಂಪ್ಗೇಯ—ಮರದಡಿಗೆ
ಹುಡುಗರಾಡಿದರು ಹೂಚೆಂಡ.

ಬಾಲೆರೆಲ್ಲಾಡಿದರೊ ಕೋಲನೆಲ್ಲಾಡಿದರೊ
ಹಸುರು ಹಸುರೆಲೆಯ ಮಲ್ಲಿಗೆಯ—ಬಳ್ಳಿ ಬಳಿ
ಬಾಲೆರಾಡಿದರು ಹೂಕೋಲ.

---

## ಚಳಿಯಪ್ಪ ಚಳಿರೊ ('ಕಲಾಕುಮಾರ')

ಬೆಳಗಿನ ಜಾವ ಎದ್ದು—ಕಂಬಳಿ ರಗ್ಗು ಹೊದ್ದು
ಮಂತ್ರ ಪೂರ ಹೇಳಿದ್ರೆ—ಮಾಗಿ ಭಾವ ಓಡ್ದ
ಚಳಿಯಪ್ಪ ಚಳಿರೊ! ಚಳಿಯಮ್ಮ ಚಳಿರೊ!

# ದುಂಬಿ

(ಪೇಜಾವರ ಸದಾಶಿವರಾವ್)

ದುಂಬಿಯು ಹಿಂಡದು ಕಾಣುತಿದೆ
ಪರಮಾನಂದದಿ ಓಡುತಿದೆ
ಹಾಡನು ಹಾಡುತ
ಶಾಂತಿಯು ಬೀರುತ
ಮಲೆಗಳ ಕಡೆಗೆಯು ಓಡುತಿದೆ.

ಮಳೆ ಚಳಿ ಬಿಸಿಲಿಗೆ ಭಯಪಡದೆ
ಅರಳಿದ ಹೂಗಳ ಮಧು ಬಿಡದೆ
ಸುಂದರ ದಿನದಲಿ
ಸುಂದರ ಬನದಲಿ
ಸತತವು ನಲಿವುದು ಎದೆಗೆಡದೆ.

ಅಂಬರ ಚುಂಬಿಪ ಗಿರಿಗಳಲಿ
ಸೊಂಪಿನ ವನ ನದಿ ಝರಿಗಳಲಿ
ಮುದದಲಿ ಹಾರುತ
ಮಧುವನು ಅರಸುತ
ಹಾರುತಲಿದೆ ಅತಿ ಲೀಲೆಯಲಿ.

———

## ಪುಟ್ಟಹಕ್ಕಿ

(ಜಿ. ವಾಸುದೇವರಾವ್)

ಹೊರಗೆ ಒಣಗಿದೆಲೆಯ ಗೂಡು,
ಒಳಗೆ ಹುಲ್ಲುಹಾಸಿಗೆ;
ಇದೇ ಮಲಗಿಕೊಳುವ ಬೀಡು
ನಮ್ಮ ಪುಟ್ಟಹಕ್ಕಿಗೆ.

ಸುತ್ತ ಬೀಸುತಿರುವ ಗಾಳಿ
ತೂಗಿ ಹಕ್ಕಿ ಗೂಡನು
ತೊಟ್ಟಿಲಂತೆ ಮಾಡಿ, ಹೇಳಿ
ನಿದ್ದೆಬರುವ ಹಾಡನು,

ಪುಟ್ಟಹಕ್ಕಿ ಕಣ್ಣು ಮುಚ್ಚಿ
ಮಲಗುವಂತೆ ಗೈವುದು.
ತಾಯಿಹಕ್ಕಿ ಗರಿಯ ಬಿಚ್ಚಿ
ಮರಿಯ ತಬ್ಬಿಕೊಳುವುದು.

ಬೆಳಕುಹರಿಯುವಾಗ ಹಕ್ಕಿ
ಎದ್ದು ಹಾರಿಪೋಪುದು.
ಸಂಜೆಯಾಗೆ ತನ್ನ ಕೊಕ್ಕಿ
ನಲ್ಲಿ ಕಾಳು ತರುವುದು.

ತಾಯಿ ಬರುವಳೇನೊ ಎಂದು
ಪುಟ್ಟಹಕ್ಕಿ ಕಾಯ್ವುದು.
ತಾಯಿಹಕ್ಕಿ ಹಾರಿಬಂದು
ತಿನಲು ಕಾಳನೀವುದು.

ಹೊರಗೆ ಒಣಗಿದೆಲೆಯ ಗೂಡು,
ಒಳಗೆ ಹುಲ್ಲುಹಾಸಿಗೆ ;
ಇದೇ ಮಲಗಿಕೊಳುವ ಬೀಡು
ನಮ್ಮ ಪುಟ್ಟಹಕ್ಕಿಗೆ.

---

## ಸಾಬೂನು (ದಿನಕರ ದೇಸಾಯಿ)

ಎಲೆ ಸಾಬೂನೆ, ನೋಡಲು ನೀನೆ,
ಪರೋಪಕಾರಿ ಜಗದಲಿ ಶಾನೆ !
ದೇಹದ ಕೊಳೆಯನು ತೆಗೆಯುವೆ ತಾನೆ
ಬುರುಬುರು ಬುರುಬುರು ನೊರೆಯಣ್ಣ
ಹೊರಹಾಕುವೆ ಬಟ್ಟೆಯ ಮಣ್ಣ.

ಹೊರಗಿನ ಬಣ್ಣವು ಕೆಂಪಾಗಿದ್ದರು
ಹಳದಿ, ನೀಲಿ, ಎಂಥದು ಇದ್ದರು
ಹೃದಯದ ನೊರೆ ಸತತವು ಬಿಳಿ ಶುದ್ಧವು!
ಬುರುಬುರು ಬುರುಬುರು ನೊರೆಯಣ್ಣ
ಮೈಯಲಿ ಅಡಗಿದೆ ಬಿಳಿ ಬಣ್ಣ!

ಏನಯ್ಯಾ, ನಿನ್ನ ದೇಹದ ಸೊಂಪು!
ಅಲ್ಲದೆ ಮೈಯಿಂ ಸೂಸುವ ಕಂಪು!
ಎನ್ನೊಡಲಿಗೆ ನೀ ನೀಡುವ ತಂಪು!
ಬುರುಬುರು ಬುರುಬುರು ನೊರೆಯಣ್ಣ
ನಿನ್ನಾಕಾರವೊ ಬಲು ಚೆನ್ನ!

ಮಕ್ಕಳು ನಿನ್ನಯ ನೀರನುಮಾಡಿ,
ಹುಲ್ಲಿನ ಕಿರುಕೊಳವಿಯಲದ ದೂಡಿ,
ಊದುತ ಚೆಂಡನು ಮಾಡುವರಾಡಿ!
ಬುರುಬುರು ಬುರುಬುರು ನೊರೆಯಣ್ಣ
ಕುಣಿಸುವೆ ಮಕ್ಕಳ ಮನವನ್ನ!

---

## ಚಟಾಕಿ

(ಎಲ್. ಗುಂಡಪ್ಪ)

ಅಪ್ಪನ ಜೇಬಿನ ದುಡ್ಡುಗಳೆಲ್ಲ
ಚಟಪಟಗುಟ್ಟುತ ಸಿಡಿಯುವುವು.
ಒಪ್ಪದ ನೀತಿಯ ಮಾತುಗಳೆಲ್ಲ
ತಟ್ಟನೆ ದಾರಿಯ ಹಿಡಿಯುವುವು.
ಬಗೆಬಗೆ ಬಣ್ಣದ ಹೂಗಳ ರೂಪದಿ
ಹಾರುತ ಬುಸುಬುಸುಗುಟ್ಟುವುವು.
ಉರಿಯನು ಸುರಿಸುತ, ಮೊರೆಯುತ, ತಿರುಗುತ,
ಸರಸರನೆಲ್ಲೆಡೆ ಹರಿಯುವುವು,
ಸೇರುವರ ಕಿವಿಗಳ ಕೊರೆಯುವುವು,
ಮೂಗಿನ ಸೆಲೆಗಳನೊಡೆಯುವುವು ;
ಸಾರವ ತೊರೆಯುತ ಕಡೆಯಲಿ ಕಪ್ಪಗೆ
ನೆಲದಲಿ ದೊಪ್ಪನೆ ಕೆಡೆಯುವುವು,
ಅಜ್ಜನ ಮಡಿಯನು ತೊಡೆಯುವುವು,
ಅಪ್ಪನ ಜೇಬುಗಳೊಡೆಯುವುವು,
ಸಿಡಿಯುವುವು.

ಹರಿಯಿತು ಹರ್ಷದ ಹೊನಲೀ ದೇಶದಿ
ಹಬ್ಬವು ಹತ್ತಿರ ಬರುತಿರಲು,

ಹೊರಲಾರದೆ ಸಾಹಸದಿ ಚಟಾಕಿಯ
ಹೊರೆಗಳ ಮೆಲ್ಲನೆ ತರುತಿರಲು,
ಸಿಡಿವ ಚಟಾಕಿಯ ತರುತಿರಲು.

ಹುಡುಗರು ನಲಿಯುತ ಕುಣಿಕುಣಿದಾಡುತ
ಹಿಡಿದು ಚಟಾಕಿಯ ಸುಡುತಿಹರು.
ಸಿಡಿದು ಚಟಾಕಿಯು ಮೇಲಕೆ ಹಾರಲು
ನಿಲ್ಲದೆ ಚಪ್ಪಳೆ ತಟ್ಟುವರು.
ಸಡಗರಗೊಳ್ಳುತ ದೂರದಿ ನೋಡುತ
ಲಲನೆಯರೆಲ್ಲರು ನಗುತಿಹರು,
ಸಿಡಿಯೆ ಚಟಾಕಿಯು ನಗುತಿಹರು.
ಮುದ್ದಿನ ದೇವಿಯ ಮುದ್ದಿನ ಮಕ್ಕಳು
ಗದ್ದಲಮಾಡುತ ಬರುತಿಹರು.
ಮುದ್ದಿನ ಮಕ್ಕಳ ನಿದ್ದೆಯನೋಡಿಸಿ
ನಗಿಸುತ ಕುಣಿಸುತ ಬರುತಿಹರು.
ಚಟಪಟಗುಟ್ಟಿ ಚಟಾಕಿಯು ಮುಂಗಡೆ
ದೀವಿಯ ತೋರುತ ಬರುತಿರಲು,
ಪೆಟ್ಟಿಗೆ ಚಟ್ಟನೆ ಸಿಡಿವ ಪಟಾಸಿನ
ಬಳಗವು ಹಿಂಬಾಲಿಸುತಿರಲು,

ಅರಳನು ಹುರಿಯುವ ಪರಿಯಲಿ ಮೊರೆಯುತ
ಬಲು ಚಿನುಕುರುಳಿಗಳೈತರಲು,
ಸರಸರ ಗರಗರ ಶಬ್ದದಿ ಮೊರೆಯುತ
ತಿರುಗುವ ಬಾಣಗಳೈತರಲು,
ಬೆಳಕನು ಬೀರಿ ಮತಾಪಿನ ಸಾಲ್ಗಳು
ಪಂಜನು ಹಿಡಿಯುತ ಬರುತಿರಲು,
ಹೊಳೆಯುವ ಹೂಗಳ ಮಳೆಯನು ಸುರಿಸುತ
ಹೂವಿನ ಬಾಣಗಳೈತರಲು,
ಒಡೆಯ ಚಟಾಕಿಯು ಬರುತಿರಲು,
ಕಡು ಹಿತದಿಂದಲಿ ಬರುತಿರಲು ;
ಹರಿಯಿತು ಹರ್ಷದ ಹೊನಲು ಚಟಾಕಿಯು
ಮೊಳಗದು ಹತ್ತಿರ ಬರುತಿರಲು,
ದೀಪಾವಳಿಯದು ಬರುತಿರಲು.

ಅಪ್ಪನ ಜೇಬಿನ ದುಡ್ಡುಗಳೆಲ್ಲ
ಚಟಪಟಗುಟ್ಟುತ ಸಿಡಿಯುವುವು.
ಹಾರುತ ಬುಸುಬುಸುಗುಟ್ಟುವುವು.
ಉರಿಯನು ಸುರಿಸುತ ಮೊರೆಯುವುವು.
ಒಪ್ಪದ ನೀತಿಯ ಮಾತುಗಳೆಲ್ಲ
ತಟ್ಟನೆ ದಾರಿಯ ಹಿಡಿಯುವುವು.

## ನಕ್ಷತ್ರ (ಕನ್ನಡ ಎರಡನೆಯ ಬಾಲಬೋಧೆಯಿಂದ)

ಮಿರುಮಿರುಗುವೆ ಹಾ!
ಕಿರುತಾರಗೆಯೇ
ಅರಿಯೆನು ನಾನೆಲೆ ನೀನಾರೋ
ಧರೆಗಿಳಿಯದೆ ನೀ
ನಿರುತಿಹೆ ದೂರದಿ
ನೆರೆ ಹೊಳೆಯುವ ವಜ್ರದ ತೆರದಿ.

ತೊಳಗುವ ಸೂರ್ಯನು
ಮುಳುಗಿದ ಕಾಲದಿ
ಬೆಳಕೆಲ್ಲೆಲ್ಲಿಯು ಕಾಣಿಸದು
ಇಳೆಯೊಳು ಜನರಿಗೆ
ಬೆಳಕನು ತೋರುತ
ಸಲೆ ಮಿಣುಕುತ್ತಿರು ರಾತ್ರಿಯೊಳು.

ಮೀರಿದ ಕತ್ತಲೆ
ಸೇರಿದ ಸಮಯದಿ
ದಾರಿಯು ನಡೆವವರೀ ಬೆಳಕ
ಸಾರುತೆ ನುತಿಪರು
ತೋರದೆ ನೀನಿರೆ
ದಾರಿಗರಿಗೆ ದೆಸೆ ಕಾಣುವುದೇ.

## ಬಿಡುವು (ಕನ್ನಡ ಎರಡನೆಯ ಪುಸ್ತಕದಿಂದ)

ಬಾರೋ ನಾವಾಡುವ ಬಾರೋ
ಸಾರಿತು ಸುಗ್ಗಿಯ ತಿಂಗಳಿದೋ
ಸಾರುವ ನಾವಿಂದಿನ ದಿನದಿ
ದೂರದ ಬೆಟ್ಟದ ಮೇಗಡೆಗೆ.

ಭಲರೇ ಬಿಡುವಾಗಿಹುದಿಂದು
ತೊಳಲುತ ವನದಲಿ ತಪ್ಪಲಲಿ
ನೆಳಲಲಿ ಬಿಸಿಲಲಿ ನಲಿದಾಡಿ
ಸುಳಿವೆವು ದೂರದ ಬೆಟ್ಟದಲಿ.

ಹೂಗಿಡದಲಿ ಹೂವರಳಿಹುದು
ಆಗಸ ತೊಳೆದಂತೆಸೆದಿಹುದು
ಕೂಗುವುವೆತ್ತಲು ಹಕ್ಕಿಗಳು
ಸಾಗುವೆವಾ ಬೆಟ್ಟದ ಬಳಿಗೆ.

ಯಾರೊಬ್ಬರು ಹಿಂದುಳಿಯದಿರಿ
ಸೇರಿಸಿಕೊಳ್ಳಿರಿ ಹಸುಳೆಗಳ
ಸಾರುವೆವೆಳಗಾಳಿಗಳೇವ
ದೂರದ ಬೆಟ್ಟದ ಮೇಗಡೆಗೆ.

ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು.